# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 711 (843) |
| ಸದಸ್ಯರ ಹೆಸರು | : | ಶ್ರೀ ರಘುನಾಥ್ ರಾವ್ ಮಲ್ಕಾಪೂರೆ<br>(ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 09-03-2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| 1. | ಕಳೆದ ಮೂರು ವರ್ಷಗಳಲ್ಲಿ ಬೀದರ್ ನಗರಸಭೆ ಮತ್ತು ಪುರಸಭೆ/ ಪಟ್ಟಣ ಪಂಚಾಯಿತಿಗಳಿಗೆ ಮೂಲ ಸೌಕರ್ಯ ಅಭಿವೃದ್ಧಿ ಹಾಗೂ ಹಣಕಾಸು ನಿಗಮದ ವತಿಯಿಂದ ಅನುಷ್ಠಾನಗೊಳಿಸಿದ ಅಭಿವೃದ್ಧಿ ಯೋಜನೆಗಳು ಯಾವುವು: (ವಿವರ ಒದಗಿಸುವುದು). | ಕಳೆದ ಮೂರು ವರ್ಷಗಳಲ್ಲಿ ಕೆ.ಯು.ಐ.ಡಿ.ಎಫ್.ಸಿ ವತಿಯಿಂದ ಏಷ್ಯಿಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕಾ ಕಾರ್ಯಕ್ರಮ (ಎನ್‌ಕೆಯುಎಸ್‌ಐಪಿ) ದಡಿಯಲ್ಲಿ ಬೀದರ್ ಜಿಲ್ಲೆಯ, ಬೀದರ್ ಮತ್ತು ಬಸವಕಲ್ಯಾಣ ನಗರಗಳಲ್ಲಿ ತೆಗೆದುಕೊಂಡ ಕಾಮಗಾರಿಗಳು ಈ ಕೆಳಕಂಡಂತೆ ಇರುತ್ತದೆ:<br><br>**ಬೀದರ್ ನಗರ:**<br>· ಕುಡಿಯುವ ನೀರು ಸರಬರಾಜು ಕಾಮಗಾರಿ 35 ವಾರ್ಡ್‌ಗಳ ಪೈಕಿ 28 ವಾರ್ಡ್‌ಗಳಲ್ಲಿ (7 ವಾರ್ಡ್‌ಗಳಲ್ಲಿ ಕೆಯುಡಬ್ಲ್ಯುಎಸ್ ಮತ್ತು ಡಿಬಿ ವತಿಯಿಂದ ವಿತರಣಾ ಕೊಳವೆ ಅಳವಡಿಸಲಾಗಿದೆ) ನಿರಂತರ ಕುಡಿಯುವ ನೀರು ಸರಬರಾಜು ಯೋಜನೆಯನ್ನು ಕೈಗೆತ್ತಿಕೊಂಡಿದ್ದು, 286 ಕಿ.ಮೀ ಕೊಳವೆ ವಿತರಣಾ ಜಾಲ ಹಾಗೂ 27,400 ಮನೆಗಳಿಗೆ ನಳ ಸಂಪರ್ಕ ನೀಡುವ ಕಾಮಗಾರಿ ಪೂರ್ಣಗೊಳಿಸಲಾಗಿದೆ. ಕುಡಿಯುವ ನೀರು ಸರಬರಾಜು ವ್ಯವಸ್ಥೆಯ ನಿರ್ವಹಣೆಯನ್ನು ಗುತ್ತಿಗೆದಾರರು ಕರಾರಿನ ನಿಯಮದಂತೆ ನಿರ್ವಹಿಸುತ್ತಿದ್ದಾರೆ.<br><br>· ಒಳಚರಂಡಿ ಕಾಮಗಾರಿಯಡಿ 83 ಕಿ.ಮೀ ಒಳಚರಂಡಿ ಜಾಲ, 2702 ಮ್ಯಾನ್ ಹೋಲ್, 3905 ರಿಸೀವಿಂಗ್ ಚೇಂಬರ್, 0.8 ಕಿ.ಮೀ ಏರು ಕೊಳವೆ ಮತ್ತು 17 ಎಂಎಲ್‌ಡಿ ಜಲ ತ್ಯಾಜ್ಯ ಸಂಸ್ಕರಣ ಘಟಕ ಕಾಮಗಾರಿ ಪೂರ್ಣಗೊಂಡಿದೆ. 17 ಎಂಎಲ್‌ಡಿ ಜಲ ತ್ಯಾಜ್ಯ ಸಂಸ್ಕರಣ ಘಟಕದ ಕಾಮಗಾರಿ ದೋಷ ನಿವಾರಣ ಅವಧಿಯಲ್ಲಿದೆ. ಈ ಯೋಜನೆಯಿಂದ ಭಾಗಶಃ 15 ವಾರ್ಡ್‌ಗಳಲ್ಲಿ ಒಳಚರಂಡಿ ಜಾಲವನ್ನು ಅಳವಡಿಸಿದೆ. ಇದರಿಂದ ಸುಮಾರು 12,000 ಕುಟುಂಬಗಳು ಪ್ರಯೋಜನೆಯನ್ನು ಪಡೆಯಬಹುದು. ಇದುವರೆಗೆ ನಗರಸಭೆಯವರು 3,000 ಮನೆಗಳಿಗೆ ಒಳಚರಂಡಿ ಸಂಪರ್ಕವನ್ನು ನೀಡಲಾಗಿರುತ್ತದೆ.<br><br>**ಬಸವಕಲ್ಯಾಣ ಪಟ್ಟಣ:**<br><br>· ಪಟ್ಟಣದ 31 ವಾರ್ಡ್‌ಗಳಲ್ಲಿ ನಿರಂತರ ಕುಡಿಯುವ ನೀರು ಸರಬರಾಜು ಯೋಜನೆಯನ್ನು ಕೈಗೆತ್ತಿಕೊಂಡಿದ್ದು, 166 ಕಿ.ಮೀ ಕೊಳವೆ ವಿತರಣಾ ಜಾಲ ಹಾಗೂ 11841 ಮನೆಗಳಿಗೆ ನಳ ಸಂಪರ್ಕ ನೀಡುವ ಕಾಮಗಾರಿ ಪೂರ್ಣಗೊಳಿಸಲಾಗಿದೆ. ಕುಡಿಯುವ ನೀರು ಸರಬರಾಜು ವ್ಯವಸ್ಥೆಯ ನಿರ್ವಹಣೆಯನ್ನು ಗುತ್ತಿಗೆದಾರರು ಕರಾರಿನ ನಿಯಮದಂತೆ ನಿರ್ವಹಿಸುತ್ತಿದ್ದಾರೆ. |
| 2. | ಸದರಿ ಕಾರ್ಯಕ್ರಮಗಳಿಗೆ ಸರ್ಕಾರದಿಂದ ಬಿಡುಗಡೆಗೊಂಡ ಅನುದಾನ ಎಷ್ಟು; ಈ ಅನುದಾನದಲ್ಲಿ ಕೈಗೊಂಡಿರುವ | ಎನ್‌ಕೆಯುಎಸ್‌ಐಪಿ ಯೋಜನೆಯನ್ನು 2008 ರಿಂದ ಎಡಿಬಿ ನೆರವಿನಡಿ ಅನುಷ್ಠಾನಗೊಳಿಸುತ್ತಿದ್ದು, ಎಡಿಬಿ ನೆರವು ಡಿಸೆಂಬರ್ 2016 ರಲ್ಲಿ ಮುಕ್ತಾಯವಾಗಿರುತ್ತದೆ. ನಂತರ |

| | | |
|---|---|---|
| | ಕಾಮಗಾರಿಗಳು ಯಾವುವು; (ವರ್ಷವಾರು ಕಾಮಗಾರಿವಾರು ವೆಚ್ಚದೊಂದಿಗೆ ಸ್ಪಷ್ಟ ಮಾಹಿತಿ ಒದಗಿಸುವುದು) | ಉಳಿಕೆ ಕಾಮಗಾರಿಗಳನ್ನು ಸರ್ಕಾರದ ಅನುಮೋದನೆ ಮೇರೆಗೆ ವಾಣಿಜ್ಯ ಬ್ಯಾಂಕಿನ ಸಾಲ ಮತ್ತು ಇತರ ಮೂಲಗಳ ಹಣಕಾಸಿನಡಿಯಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಗಳಿಗೆ ಆಗಿಂದಾಗ್ಯೆ ವೆಚ್ಚವಾದಂತೆ ಹಣವನ್ನು ಭರಿಸಲಾಗುತ್ತಿದೆ. ಕಳೆದ ಮೂರು ವರ್ಷದ ವೆಚ್ಚ ಈ ಕೆಳಕಂಡಂತಿದೆ. |

| ಸಂ. | ಕಾಮಗಾರಿ ವಿವರ | ವೆಚ್ಚ ರೂ.ಕೋಟಿಗಳಲ್ಲಿ | | | | |
|---|---|---|---|---|---|---|
| | | 2018 ವರೆಗೆ | 2018-19 | 2019-20 | 2020-21 | ಕಳೆದ 3 ವರ್ಷದ ಒಟ್ಟು |
| | ಬೀದರ್ | | | | | |
| 1 | 24X7 ನಿರಂತರ ನೀರು ಸರಬರಾಜು ಕಾಮಗಾರಿ (ಪ್ಯಾಕೇಜು-04ಬಿಡಿಆರ್01). | 26.71 | 3.70 | 2.41 | - | 6.11 |
| 2 | ಒಳಚರಂಡಿ ವ್ಯವಸ್ಥೆ ಹಾಗೂ ಎಸ್.ಟಿ.ಪಿ ನಿರ್ಮಾಣ (ಪ್ಯಾಕೇಜು-02ಬಿಡಿಆರ್02). | 37.67 | 1.09 | - | 0.36 | 1.45 |
| 3 | ಹೊಸ ಪ್ರದೇಶಕ್ಕೆ ಒಳಚರಂಡಿ ವ್ಯವಸ್ಥೆ ವಿಸ್ತರಣೆ (ಪ್ಯಾಕೇಜು-03ಬಿಡಿಆರ್02). | 17.97 | - | - | - | - |
| | ಬಸವಕಲ್ಯಾಣ | | | | | |
| 4 | 24X7 ನಿರಂತರ ನೀರು ಸರಬರಾಜು ಕಾಮಗಾರಿ (ಪ್ಯಾಕೇಜು-04ಬಿಎಸ್‌ಕೆ01) | 43.13 | 8.26 | 1.46 | - | 9.72 |

| | | |
|---|---|---|
| 3. | ಬೀದರ್ ಜಿಲ್ಲೆಯ ನಗರ ಸ್ಥಳೀಯ ಸಂಸ್ಥೆಗಳನ್ನು ಪರಿಪೂರ್ಣ ಅಭಿವೃದ್ಧಿಗಾಗಿ ಮೂಲಸೌಕರ್ಯ ಒದಗಿಸಲು ಸಂಪನ್ಮೂಲಗಳ ಕ್ರೋಢೀಕರಣ ಮತ್ತು ಹಂಚಿಕೆಗೆ ಸರ್ಕಾರಕ್ಕೆ ಹೊಸದಾಗಿ ನಗರ ಸ್ಥಳೀಯ ಸಂಸ್ಥೆಗಳಿಂದ ಪ್ರಸ್ತಾವನೆ ಹಾಗೂ ಕ್ರಿಯಾ ಯೋಜನೆಗಳು ಬಂದಿದೆಯೇ; | ಬೀದರ ಜಿಲ್ಲೆಯ ನಗರ ಸ್ಥಳೀಯ ಸಂಸ್ಥೆಗಳಿಂದ ಸಂಪನ್ಮೂಲಗಳ ಕ್ರೋಢೀಕರಣ ಮತ್ತು ಹಂಚಿಕೆಗೆ ಸಂಬಂಧಿಸಿದಂತೆ ಯಾವುದೇ ಕ್ರಿಯಾ ಯೋಜನೆ ಅಥವಾ ಪ್ರಸ್ತಾವನೆ ಸ್ವೀಕೃತಗೊಂಡಿರುವುದಿಲ್ಲ. |
| 4. | ಬಂದಿದ್ದಲ್ಲಿ, ಅವುಗಳು ಯಾವುವು? (ಯೋಜನೆಗಳವಾರು ಸಂಪೂರ್ಣ ಮಾಹಿತಿ ಒದಗಿಸುವುದು) | |

ಕಡತ ಸಂಖ್ಯೆ:ನಅಇ 122 ಎಸ್.ಎಫ್.ಸಿ 2021

**(ಎನ್. ನಾಗರಾಜ್, ಎಂ.ಟಿ.ಬಿ.)**
ಪೌರಾಡಳಿತ ಹಾಗೂ ಸಕ್ಕರೆ ಸಚಿವರು